# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1002 |
| ಸದಸ್ಯರ ಹೆಸರು | ಶ್ರೀ ಎನ್ ರವಿಕುಮಾರ್ |
| ಉತ್ತರಿಸುವ ದಿನಾಂಕ | 22-12-2021 |
| ಉತ್ತರಿಸುವವರು | ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಶ್ರೀಮತಿ ದ್ವಾರಕಬಾಯಿ ವೇದಾಂತರವರು ಬೆಂಗಳೂರು ದಕ್ಷಿಣ ತಾಲ್ಲೂಕು ತಾವರೆಕೆರೆ ಹೋಬಳಿಯ ಬ್ಯಾಲಾಳು ಚೋಳನಾಯಕನ ಹಳ್ಳಿ ಪೆದ್ದನ ಪಾಳ್ಯ ದೊಡ್ಡಮಾರನಹಳ್ಳಿ ಮತ್ತು ಕಾಡುಮಾರನಹಳ್ಳಿ 1198-34 ಎಕರೆ ಜಾಗವನ್ನು 11/13ನೇ ಏಪ್ರಿಲ್ 1939 ರಂದು ಶ್ರೀರಂಗಪಟ್ಟಣ ತಾಲ್ಲೂಕು, ಶ್ರೀ ರಂಗನಾಥಸ್ವಾಮಿ ದೇವಾಲಯಕ್ಕೆ ದಾನವಾಗಿ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಸದರಿ ಜಾಗವನ್ನು ಯಾವ ಕಾರಣಕ್ಕಾಗಿ ದಾನವಾಗಿ ನೀಡಲಾಗಿದೆ. ಪ್ರಸ್ತುತ ಎಷ್ಟು ಎಕರೆ ಜಾಗ ದೇವಾಲಯದ ಹೆಸರಿನಲ್ಲಿದೆ; ಅನಧಿಕೃತವಾಗಿ ಒತ್ತುವರಿಯಾದ ಜಾಗವೆಷ್ಟು (ಒತ್ತುವರಿದಾರರ ಹೆಸರಿನೊಂದಿಗೆ ಮಾಹಿತಿ ನೀಡುವುದು) | ಬೆಂಗಳೂರಿನ ಮಲ್ಲೇಶ್ವರಂ ನಿವಾಸಿಯಾದ ಶ್ರೀಮತಿ ದ್ವಾರಕಾಬಾಯಿ ವೇದಾಂತಂ ರವರು ಈ ಹಿಂದಿನ ಮಾಗಡಿ ತಾಲ್ಲೂಕು, ಹಾಲಿ ಬೆಂಗಳೂರು ದಕ್ಷಿಣ ತಾಲ್ಲೂಕಿಗೆ ಸೇರಿದ ತಾವರೆಕೆರೆ ಹೋಬಳಿಯ ಬ್ಯಾಲಾಳು, ಚೋಳನಾಯಕನಹಳ್ಳಿ, ಪೆದ್ದನಪಾಳ್ಯ, ದೊಡ್ಡಮಾರನಹಳ್ಳಿ, ಮತ್ತು ಕಾಡುಕರೇನಹಳ್ಳಿ (ಕುರುಬರಹಳ್ಳಿ) ಈ ಗ್ರಾಮಗಳಿಗೆ ಸೇರಿದ ಒಟ್ಟು 1198-34 ವಿಸ್ತೀರ್ಣದ ಜಮೀನಿನ ಪೈಕಿ 300.00 ಎಕರೆ ಖರಾಬು ಜಮೀನನ್ನು ಕಳೆದು ಬಾಕಿ ಉಳಿದ 898-34 ಎಕರೆ ವಿಸ್ತೀರ್ಣದ ಜಮೀನನ್ನು ದತ್ತಿ ರೂಪದಲ್ಲಿ ಕೊಡಲು 1939 ಕ್ಕಿಂತ ಹಿಂದೆಯೇ ಮುಂದೆ ಬಂದಿದ್ದು, ಈ ಬಗ್ಗೆ ಅಂದಿನ ಮೈಸೂರು ಮಹಾರಾಜರ ಸರ್ಕಾರದ ಆದೇಶ ಸಂಖ್ಯೆ:755-9.MUZ.313-38-3 ದಿನಾಂಕ: 11/13ನೇ ಏಪ್ರಿಲ್ 1939 ರನ್ವಯ ಒಂದು ಆದೇಶವನ್ನು ಹೊರಡಿಸಿರುವುದು ಗಮನಕ್ಕೆ ಬಂದಿರುತ್ತದೆ.<br><br>ಮೇಲ್ಕಂಡ ಗ್ರಾಮಗಳಲ್ಲಿನ ಶ್ರೀಮತಿ ದ್ವಾರಕಾಬಾಯಿ ವೇದಾಂತಂ ರವರಿಗೆ ಸೇರಿದ ವಿವಿಧ ಸರ್ವೆ ನಂಬರ್‌ಗಳಲ್ಲಿನ ಆಸ್ತಿಗಳನ್ನು ಅಂದಿನ ಮೈಸೂರು ಸರ್ಕಾರದ **'ಮುಜರಾಯಿ ಕಮಿಷನರ್'** ರವರ ಹೆಸರಿಗೆ ದಾನವಾಗಿ ನೀಡಿದ್ದು, ಸರ್ಕಾರದ ಆದೇಶ ಸಂಖ್ಯೆ:2170-4 MUZ 383-39-4 ದಿನಾಂಕ:26-02-1941 ರಂದು ಒಂದು ಆದೇಶವಾಗಿ ಸದರಿ ಆಸ್ತಿಗಳು ಹಾಗೂ ಅದರ ಆದಾಯವನ್ನು ಹೇಗೆ ನಿರ್ವಹಿಸಬೇಕೆಂಬ ಬಗ್ಗೆ **"ಶ್ರೀಮತಿ ದ್ವಾರಕಾಬಾಯಿ ವೇದಾಂತಂ ದತ್ತಿ"** ಎಂಬ ಹೆಸರಿನಲ್ಲಿ ನಿಯಮಾವಳಿಯನ್ನು ರೂಪಿಸಲಾಗಿರುತ್ತದೆ. ಸದರಿ ಆಸ್ತಿಗಳಿಂದ ಬರುವ ನಿವ್ವಳ ಆದಾಯವನ್ನು ಈ ಕೆಳಕಂಡ ಉದ್ದೇಶಗಳಿಗೆ ಉಪಯೋಗಿಸಬೇಕೆಂದು ಮೇಲಿನ ಆದೇಶಗಳಿಂದ ಕಂಡು ಬಂದಿರುತ್ತದೆ.<br><br>1. ಮಂಡ್ಯ ಜಿಲ್ಲೆ, ಶ್ರೀರಂಗಪಟ್ಟಣ ತಾಲ್ಲೂಕು, ಶ್ರೀ ರಂಗನಾಥಸ್ವಾಮಿ ದೇವಾಲಯದಲ್ಲಿ ತುಲಾಮಾಸದಲ್ಲಿ ನಡೆಯುವ ಪೂಜಾ ಕೈಂಕರ್ಯಗಳ ಸಂದರ್ಭದಲ್ಲಿ ಆಗಮಿಸುವ ಭಕ್ತಾದಿಗಳಿಗೆ ಅನ್ನಸಂತರ್ಪಣೆಗಾಗಿ ಈ ಆಸ್ತಿಗಳ ಒಟ್ಟು ಆದಾಯದ 1/3 ಭಾಗವನ್ನು ಉಪಯೋಗಿಸತಕ್ಕದ್ದು.<br>2. ಉಳಿದ ಹಣವನ್ನು ವೈದ್ಯಕೀಯ ಶಿಕ್ಷಣ ಮಾಡುವ ಮಹಿಳಾ ವಿದ್ಯಾರ್ಥಿಗಳಿಗೆ ಮತ್ತು ಆರೋಗ್ಯದ ಮಾಹಿತಿಗಳನ್ನು ಪಸರಿಸುವ ಬಗ್ಗೆ ಮತ್ತು ಶುಚಿತ್ವದ ಅಭ್ಯಾಸವನ್ನು ಬೆಳೆಸುವ ಸಂಬಂಧ ಅಂತಹ ವಿದ್ಯಾರ್ಥಿಗಳಿಗೆ ಶಿಷ್ಯವೇತನವನ್ನು ಕೊಡತಕ್ಕದ್ದು. |

....2

| | | |
|---|---|---|
| | | ಶ್ರೀಮತಿ ದ್ವಾರಾಕಾಬಾಯಿ ವೇದಾಂತಂರವರ ಇಚ್ಛೆಯಂತೆ ಸದರಿ ಆಸ್ತಿಗಳನ್ನು ಅಂದಿನ ಮೈಸೂರು ಸರ್ಕಾರದ **'ಮುಜರಾಯಿ ಕಮಿಷನರ್'** ರವರ ಹೆಸರಿಗೆ ದಾನವಾಗಿ ನೀಡಿದ ನಂತರ ಕಂದಾಯ ದಾಖಲೆಗಳಲ್ಲಿ ಮುಜರಾಯಿ ಕಮೀಷನರ್ ಎಂಬುದಾಗಿ ನಮೂದಿಸದೇ ಇದ್ದ ಕಾರಣ, ಹಾಗೂ ಕಂದಾಯ ದಾಖಲೆಗಳಲ್ಲಿ ಶ್ರೀ ರಂಗನಾಥಸ್ವಾಮಿ ದೇವಸ್ಥಾನ ಶ್ರೀರಂಗಪಟ್ಟಣ ಎಂದು ನಮೂದಿಸಲಾಗಿರುತ್ತದೆ.<br>ಪ್ರಸ್ತಾಪಿತ ಜಮೀನುಗಳ ಕಂದಾಯ ದಾಖಲೆಗಳಲ್ಲಿ ಮುಜರಾಯಿ ಕಮೀಷನರ್ ರವರ ಹೆಸರನ್ನು ನಮೂದಿಸದ ಕಾರಣ ಸದರಿ ಜಮೀನುಗಳು ಇನಾಂ ಜಮೀನುಗಳೆಂದು ಭಾವಿಸಿ ಬಹುತೇಕ ಜಮೀನುಗಳನ್ನು ಈ ಹಿಂದೆಯೇ ಇನಾಂ ರದ್ದಿಯಾತಿ ಕಾಯ್ದೆ ಮತ್ತು ಭೂ ಸುಧಾರಣ ಕಾಯ್ದೆ ಅಡಿಯಲ್ಲಿ ಪರಭಾರೆ ಮಾಡಲಾಗಿರುತ್ತದೆ.<br>ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 15 ಎಲ್‌ಜಿಪಿ 2020, ದಿನಾಂಕ: 12.02.2020ರ ಆದೇಶಾನುಸಾರ ರಾಜ್ಯದಲ್ಲಿರುವ ಸರ್ಕಾರಿ ಜಮೀನುಗಳ ಒತ್ತುವರಿಯನ್ನು ತೆರವುಗೊಳಿಸಲು ಹಾಗೂ ಸಂರಕ್ಷಿಸಲು "ಸರ್ಕಾರಿ ಜಮೀನುಗಳ ಸಂರಕ್ಷಣಾ ಸಮಿತಿ" ರಚಿಸಿದ್ದು, ಸದರಿ ಸಮಿತಿಗೆ ನಿಯೋಜಿತ ಕಾರ್ಯಗಳನ್ನು ನಿರ್ವಹಿಸಲು ಕರ್ನಾಟಕ ಭೂ ಕಂದಾಯ ಕಾಯ್ದೆ 1964, ಸೆಕ್ಷನ್ 195 ರಡಿಯಲ್ಲಿ ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿದೆ.<br>ಮಾನ್ಯ **"ಸರ್ಕಾರಿ ಜಮೀನುಗಳ ಸಂರಕ್ಷಣಾ ಸಮಿತಿ"**ಯು ಅಧಿಸೂಚಿತ ದೇವಾಲಯಗಳ ಜಮೀನುಗಳ ಮಾಹಿತಿ ಮತ್ತು ಅವುಗಳ ಒತ್ತುವರಿಯನ್ನು ತೆರವುಗೊಳಿಸುವ ಸಂಬಂಧ ಈವರೆಗೆ ನಡೆಸಿದ ಹಲವಾರು ಸಭೆಯಲ್ಲಿ ಪ್ರಸ್ತಾಪಿತ ಜಮೀನಿನ ಬಗ್ಗೆ ಚರ್ಚಿಸಿ ನೀಡಲಾದ ಸೂಚನೆ ಮತ್ತು ನಿರ್ದೇಶನದಂತೆ ಮಾಹಿತಿಯನ್ನು ತಹಸೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ರವರು ಸಮಿತಿ ಸಭೆಗೆ ಒದಗಿಸಿದ್ದು, ಅದರಂತೆ ಒಟ್ಟು 152-22 ಎ/ಗು ವಿಸ್ತೀರ್ಣದ ಜಮೀನು ಶ್ರೀರಂಗಪಟ್ಟಣದ ಶ್ರೀ ರಂಗನಾಥ ಸ್ವಾಮಿ ದೇವರ ಹೆಸರಿನಲ್ಲಿ ಪಹಣಿ ಇರುತ್ತದೆ. ಉಳಿದ ಜಮೀನುಗಳು ನಿಯಮ ಬಾಹಿರವಾಗಿ ಒತ್ತುವರಿ/ ಪರಭಾರೆ/ ಭೂ ಮಂಜೂರಾತಿ/ ಭೂ ಸ್ವಾಧೀನದ ಮೂಲಕ ಪ್ರಾಧಿಕಾರವು ಮಂಜೂರಾತಿ ನೀಡಿರುವಂತೆ ಸದರಿ ವ್ಯಕ್ತಿಗಳ ಹೆಸರಿನಲ್ಲಿರುತ್ತದೆ.<br>ಬೆಂಗಳೂರು ದಕ್ಷಿಣ ತಾಲ್ಲೂಕಿನಲ್ಲಿ ಬರುವ ಬ್ಯಾಲಾಳು ಗ್ರಾಮದ ಸರ್ವೆ ನಂಬರ್ 47/1 ರಿಂದ 47/76 ರವರೆಗೆ ಪೋಡಿಯಾಗಿದು ಪೂರಾ ವಿಸ್ತೀರ್ಣ ಕರ್ನಾಟಕ ಗೃಹ ಮಂಡಳಿಗೆ ಭೂಸ್ವಾಧೀನವಾಗಿರುತ್ತದೆ. ಸರ್ವೆ ನಂಬರ್ 51ರಲ್ಲಿ 49-16 ಎ/ಗು ಖರಾಬು ಜಾತಾ 45-00 ಎಕರೆ ಜಮೀನು ಎಲ್‌ಆರ್‌ಎಫ್ ಐಎನ್‌ಎ(ತಾ) 14,15,16,17,18/81-82 ದಿನಾಂಕ:20-05-1986 ರಂತೆ ಐದು ಜನ ರೈತರುಗಳಿಗೆ ಮಂಜೂರಿಯಾಗಿದ್ದು, ನಂತರ ಇಸ್ರೋ ಸಂಸ್ಥೆಗೆ (ಬಾಹ್ಯಾಕಾಶ ಇಲಾಖೆಗೆ) ಪೂರಾ ಜಮೀನು ಭೂಸ್ವಾಧೀನವಾಗಿರುತ್ತದೆ. ಎಲ್.ಎ.ಕ್ಯೂ(6).ಎಸ್.ಆರ್.9/2004-05 ರಂತೆ ದಿನಾಂಕ: 05-07-2005ರಂತೆ ಇಸ್ರೋ ವಶದಲ್ಲಿ ಇರುತ್ತದೆ. ಸರ್ವೆ ನಂ.53ರಲ್ಲಿ 19-00 ಎಕರೆ ವಿಸ್ತೀರ್ಣದ ಪೈಕಿ 2-20 ಎ/ಗು ಜಮೀನು ಎಲ್ ಆರ್ ಎಫ್ (7ಎ) 126/2000-01 ದಿನಾಂಕ: 05-07-2005ರಲ್ಲಿ ಮಂಜೂರಿಯಾಗಿರುತ್ತದೆ.<br>ಪ್ರಸ್ತಾಪಿತ ಜಮೀನುಗಳನ್ನು ನಿಯಮ ಬಾಹಿರವಾಗಿ ಒತ್ತುವರಿ / ಪರಭಾರೆ / ಭೂ ಮಂಜೂರಾತಿ, ಭೂ ಸ್ವಾಧೀನದ ಮೂಲಕ ಸಂಬಂಧಪಟ್ಟ ಪ್ರಾಧಿಕಾರಗಳು |

| | | |
|---|---|---|
| | | ಮಂಜೂರಾತಿ ನೀಡಿರುವುದನ್ನು ಸರ್ಕಾರದ ವಶಕ್ಕೆ ಪಡೆಯಲು ಸರ್ಕಾರದ ಆದೇಶ ಸಂಖ್ಯೆ:ಕಂಇ 98/ಮುಅಬಿ 2021, ದಿನಾಂಕ: 28/09/2021 & ದಿನಾಂಕ; 11-11-2021ರನ್ವಯ ಧಾರ್ಮಿಕ ದತ್ತಿ ಆಯುಕ್ತರು, ಬೆಂಗಳೂರು ರವರ ಅಧ್ಯಕ್ಷತೆಯಲ್ಲಿ ಒಟ್ಟು 13 ಜನ ಅಧಿಕಾರಿಗಳನ್ನು ಒಳಗೊಂಡಂತೆ ಸಮಿತಿಯನ್ನು ರಚಿಸಿದ್ದು, ಸದರಿ ಸಮಿತಿಯು ಸಭೆಗಳನ್ನು ನಡೆಸಿ, ದೇವಾಲಯಕ್ಕೆ ಸೇರಿದ ಜಮೀನಿನ ಅನಧಿಕೃತ ಒತ್ತುವರಿದಾರರನ್ನು ಗುರುತಿಸಿ, ಒತ್ತುವರಿದಾರರನ್ನು ತೆರವುಗೊಳಿಸಿ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲು ಕ್ರಮಗಳನ್ನು ವಹಿಸಲಾಗುತ್ತಿರುತ್ತದೆ.<br><br>ದಿನಾಂಕ:11-11-2021 & ದಿನಾಂಕ:18-11-2021ರಂದು ನಡೆದ ಧಾರ್ಮಿಕ ದತ್ತಿ ಆಯುಕ್ತರ ಅಧ್ಯಕ್ಷತೆಯ ಸಮಿತಿಯ ಸಭೆಯಲ್ಲಿ ತಹಶೀಲ್ದಾರ್ ಬೆಂಗಳೂರು ದಕ್ಷಿಣ ತಾಲ್ಲೂಕು ರವರು ಸಲ್ಲಿಸಿದ ಕಂದಾಯ ದಾಖಲೆಗಳಲ್ಲಿ ಒಟ್ಟು 152-22 ಎ/ಗು ವಿಸ್ತೀರ್ಣದ ಜಮೀನು ಶ್ರೀರಂಗಪಟ್ಟಣದ ಶ್ರೀ ರಂಗನಾಥ ಸ್ವಾಮಿ ದೇವರ ಹೆಸರಿನಲ್ಲಿ ಪಹಣಿ ಇರುವುದಾಗಿ ಕಂಡು ಬಂದಿದ್ದು ಸದರಿ ದಾಖಲೆಗಳಲ್ಲಿ ಶ್ರೀ ರಂಗನಾಥಸ್ವಾಮಿ ದೇವರ ಹೆಸರಿನ ಬದಲಾಗಿ ಆಯುಕ್ತರು ಧಾರ್ಮಿಕ ದತ್ತಿ ಇಲಾಖೆ ಇವರ ಹೆಸರನ್ನು ಆರ್ .ಟಿ.ಸಿ ಮತ್ತು ಭೂಧಾಖಲೆಗಳಲ್ಲಿ ದಾಖಲಿಸಲು ತಹಶೀಲ್ದಾರ್ ದಕ್ಷಿಣ ತಾಲ್ಲೂಕು ರವರಿಗೆ ಸೂಚನೆ ನೀಡಲಾಗಿರುತ್ತದೆ.<br><br>ಈಗಾಗಲೇ ಇಲಾಖೆಯ ವಶಕ್ಕೆ ಪಡೆಯಲಾಗಿರುವ ಚೋಳನಾಯಕನಹಳ್ಳಿ ಗ್ರಾಮದ 56 ಎಕರೆ ಜಮೀನಿಗೆ ಬೌಂಡರಿ ನಿರ್ಮಿಸಲು ಹಾಗೂ ಸದರಿ ಜಮೀನಿಗೆ ತಂತಿ ಬೇಲಿಯನ್ನು ಅಳವಡಿಸಲು ಕ್ರಮ ಕೈಗೊಳ್ಳುವಂತೆ ಅಪರ ಜಿಲ್ಲಾಧಿಕಾರಿಗಳು ಮತ್ತು ಉಪ ಆಯುಕ್ತರು ಧಾರ್ಮಿಕ ದತ್ತಿ ಇಲಾಖೆ ಬೆಂಗಳೂರು ರವರಿಗೆ ಸೂಚನೆ ನೀಡಲಾಗಿರುತ್ತದೆ.<br><br>ಪ್ರಸ್ತಾಪಿತ ಸರ್ವೆ ನಂಬರ್‌ಗಳ ಜಮೀನುಗಳನ್ನು ಇತರೆ ಯಾರ ಹೆಸರಿಗೂ ನೋಂದಣಿ ಮಾಡದಂತೆ ಸಂಬಂಧಪಟ್ಟ ಉಪ ನೋಂದಣಾಧಿಕಾರಿಗಳಿಗೆ ಸೂಚಿಸಲಾಗಿರುತ್ತದೆ.<br><br>ಅದಲ್ಲದೇ, ಸದರಿ ಗ್ರಾಮಗಳ ಸರ್ವೆ ನಂಬರ್‌ಗಳಿಗೆ ಸಂಬಂಧಿಸಿದಂತೆ ಅನಧಿಕೃತವಾಗಿ ಒತ್ತುವರಿಯಾಗಿರುವ ಬಗ್ಗೆ ಕರ್ನಾಟಕ ಭೂಕಬಳಿಕೆ ನಿಷೇಧ ವಿಶೇಷ ನ್ಯಾಯಾಲಯದಲ್ಲಿ 44/16-17, 46/16-17, 47/16-17, 45/2016-17, 15-16-17ರಂತೆ ಸ್ವಯಂ ಪ್ರಕರಣಗಳು ದಾಖಲಾಗಿರುತ್ತದೆ ಹಾಗೂ ಮಾನ್ಯ ಉಚ್ಛನ್ಯಾಯಾಲಯದಲ್ಲಿಯೂ ಸಹ ಡಬ್ಲ್ಯೂಪಿ 13564/2019 ರಂತೆ ಪ್ರಕರಣ ದಾಖಲಾಗಿದ್ದು, ಸದರಿ ಪ್ರಕರಣಗಳು ವಿಚಾರಣಾ ಹಂತದಲ್ಲಿ ಬಾಕಿ ಇರುತ್ತದೆ . |
| ಅ | ಸದರಿ ಜಾಗದಲ್ಲಿ ಪ್ರಸ್ತುತ ಒಟ್ಟು ಎಷ್ಟು ಎಕರೆ ಜಾಗ ಒತ್ತುವರಿ, ಪರಭಾರೆಯಾಗಿದೆ; ಯಾವ ವರ್ಷದಲ್ಲಿ ಬೇರೆಯವರ ಹೆಸರಿನಲ್ಲಿ ದಾಖಲೆಗಳಾಗಿವೆ; ಈ ಅಕ್ರಮ ಅನಧಿಕೃತ ಪರಭಾರೆಗೆ ದಾಖಲೆಗಳನ್ನು ಸೃಷ್ಟಿಸುವಲ್ಲಿ ಸಹಕರಿಸಿದ ಅಧಿಕಾರಿಗಳ ಮೇಲೆ ರಾಜ್ಯ ಸರ್ಕಾರದ ಬೊಕ್ಕಸಕ್ಕೆ ಮೋಸಮಾಡಿದ ಹಾಗು ಸರ್ಕಾರದ ಆಸ್ತಿಯನ್ನು ರಕ್ಷಿಸಲು ಅಸಮರ್ಥರಾದ ಕುರಿತು ಕ್ರಿಮಿನಲ್ ಪ್ರಕರಣ ದಾಖಲು ಮಾಡದಿರಲು ಕಾರಣವೇನು; ನಕಲಿ | ಬೆಂಗಳೂರು ದಕ್ಷಿಣ ತಾಲ್ಲೂಕಿನಲ್ಲಿ ಬರುವ ಬ್ಯಾಲಾಳು ಗ್ರಾಮದ ಸರ್ವೆ ನಂಬರ್ 47/1 ರಿಂದ 47/76 ರವರೆಗೆ ಪೋಡಿಯಾಗಿದ್ದು, ಪೂರಾ ವಿಸ್ತೀರ್ಣ ಕರ್ನಾಟಕ ಗೃಹ ಮಂಡಳಿಗೆ ಭೂಸ್ವಾಧೀನವಾಗಿರುತ್ತದೆ. ಸರ್ವೆ ನಂಬರ್ 51 ರಲ್ಲಿ 49-16 ಎ/ಗು ಖರಾಬು ಜಾತಾ 45-00 ಎಕರೆ ಜಮೀನು ಎಲ್‌ಆರ್‌ಎಫ್ ಐಎನ್ಎ(ತಾ) 14,15,16,17,18/81-82 ದಿನಾಂಕ:20-05-1986 ರಂತೆ ಐದು ಜನ ರೈತರುಗಳಿಗೆ ಮಂಜೂರಿಯಾಗಿದ್ದು, ನಂತರ ಇಸ್ರೋ ಸಂಸ್ಥೆಗೆ (ಬಾಹ್ಯಾಕಾಶ ಇಲಾಖೆಗೆ) ಪೂರಾ ಜಮೀನು ಭೂಸ್ವಾಧೀನವಾಗಿರುತ್ತದೆ. ಎಲ್.ಎ.ಕ್ಯೂ(6).ಎಸ್.ಆರ್.9/ 2004-05ರಂತೆ ದಿನಾಂಕ:05-07-2005ರಂತೆ ಇಸ್ರೋ ವಶದಲ್ಲಿ ಇರುತ್ತದೆ. ಸರ್ವೆ ನಂ.53ರಲ್ಲಿ 19-00 ಎಕರೆ ವಿಸ್ತೀರ್ಣದ ಪೈಕಿ 2-20 ಎ/ಗು ಜಮೀನು ಎಲ್ |

....4

| | | |
|---|---|---|
| | ದಾಖಲೆಗಳನ್ನು ಸೃಷ್ಟಿಸಿ ಸಹಿ ಮಾಡಿದ ಅಧಿಕಾರಿಗಳ ಹೆಸರಿನೊಂದಿಗೆ ವಿವರ ನೀಡುವುದು. | ಆರ್ ಎಫ್ (7ಎ) 126/2000-01 ದಿನಾಂಕ: 05-07-2005ರಲ್ಲಿ ಮಂಜೂರಿ ಯಾಗಿರುತ್ತದೆ.<br>ಪ್ರಸ್ತಾಪಿತ ಗ್ರಾಮಗಳಲ್ಲಿನ ಶ್ರೀಮತಿ ದ್ವಾರಾಕಾಬಾಯಿ ವೇದಾಂತಂ ರವರಿಂದ ದಾನವಾಗಿ ಬಂದ ವಿವಿಧ ಸರ್ವೆ ನಂಬರ್‌ಗಳಲ್ಲಿ ಅನಧಿಕೃತವಾಗಿ ಒತ್ತುವರಿಯಾಗಿರುವ ಬಗ್ಗೆ ಕರ್ನಾಟಕ ಭೂಕಬಳಿಕೆ ನಿಷೇಧ ವಿಶೇಷ ನ್ಯಾಯಾಲಯದಲ್ಲಿ 44/16-17, 46/16-17, 47/16-17, 45/2016-17, 15-16-17ರಂತೆ ಸ್ವಯಂ ಪ್ರಕರಣಗಳು ದಾಖಲಾಗಿರುತ್ತದೆ ಹಾಗೂ ಮಾನ್ಯ ಉಚ್ಛನ್ಯಾಯಾಲಯದಲ್ಲಿಯೂ ಸಹ ಡಬ್ಲ್ಯೂಪಿ 13564/2019 ರಂತೆ ಪ್ರಕರಣ ದಾಖಲಾಗಿದ್ದು, ಸದರಿ ಪ್ರಕರಣಗಳು ವಿಚಾರಣಾ ಹಂತದಲ್ಲಿ ಬಾಕಿ ಇರುತ್ತದೆ.<br>ಮಾನ್ಯ **"ಸರ್ಕಾರಿ ಜಮೀನುಗಳ ಸಂರಕ್ಷಣಾ ಸಮಿತಿ"**ಯ ಶಿಫಾರಸ್ಸಿನ ಮೇರೆಗೆ ಸರ್ಕಾರದ ಆದೇಶ ಸಂಖ್ಯೆ:ಕಂಇ 98/ ಮುಅಬಿ 2021, ದಿನಾಂಕ: 28/09/2021 ರಲ್ಲಿ ಧಾರ್ಮಿಕ ದತ್ತಿ ಆಯುಕ್ತರು, ಬೆಂಗಳೂರು ರವರ ಅಧ್ಯಕ್ಷತೆಯಲ್ಲಿ ಸದರಿ ಜಾಗಕ್ಕೆ ಸಂಬಂಧಿಸಿದಂತೆ ಪ್ರಸ್ತುತ ನಿಯಮ ಬಾಹಿರ ಒತ್ತುವರಿ/ ಪರಭಾರೆ/ ಭೂ ಮಂಜೂರಾತಿಯನ್ನು, ಭೂ ಸ್ವಾಧೀನದ ಮೂಲಕ ಪ್ರಾಧಿಕಾರವು ಮಂಜೂರಾತಿ ನೀಡಿರುವುದನ್ನು ಗುರುತಿಸಿ ಅದನ್ನು ತೆರವುಗೊಳಿಸಿ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲು ಒಟ್ಟು 13 ಜನ ಅಧಿಕಾರಿಗಳನ್ನು ಒಳಗೊಂಡಂತೆ ಸಮಿತಿಯನ್ನು ರಚಿಸಿದ್ದು, ಸದರಿ ಸಮಿತಿಯು ಸಭೆಗಳನ್ನು ನಡೆಸಿರುತ್ತದೆ.<br>ಸದರಿ ಜಾಗದ ಒತ್ತುವರಿಗೆ ಸಂಬಂಧಿಸಿದಂತೆ ಪೂರಕ ದಾಖಲಾತಿಗಳು/ ಮಾಹಿತಿಗಳನ್ನು ಕಲೆಹಾಕಲಾಗುತ್ತಿದ್ದು, ಮಾನ್ಯ **"ಸರ್ಕಾರಿ ಜಮೀನುಗಳ ಸಂರಕ್ಷಣಾ ಸಮಿತಿ"** ಸಭೆಗೆ ದಾಖಲೆ/ಮಾಹಿತಿಯನ್ನು ಒದಗಿಸಿದ ನಂತರ ಮಾನ್ಯ ಸಮಿತಿಯ ನಿರ್ದೇಶನಾನುಸಾರ ಒತ್ತುವರಿಗೆ ಸಹಕರಿಸಿದ ತಪ್ಪಿತಸ್ಥರ ವಿರುದ್ಧ ನಿಯಮಾನುಸಾರ ಕ್ರಮಗಳನ್ನು ತೆಗೆದುಕೊಳ್ಳಲಾಗುತ್ತದೆ. |
| ೩ | ಬೆಂಗಳೂರು ನಗರ ನೀಲಸಂದ್ರ ಗ್ರಾಮದ ಸರ್ವೆ ನಂ.79ರಲ್ಲಿ 15 ಎಕರೆ 12 ಗುಂಟೆ ಜಾಗ ಬೆಂಗಳೂರು ನಗರ ತಿಗಳರ ಪೇಟೆ ಶ್ರೀ ಧರ್ಮರಾಯ ಸ್ವಾಮಿ ದೇವಾಲಯಕ್ಕೆ ಸೇರಿರುವ ಕುರಿತು ಇಲಾಖೆಯಲ್ಲಿ ಮಾಹಿತಿ ಇದಯೇ; ಪ್ರಸ್ತುತ ಆ ಜಾಗದ ಪಹಣಿಯಲ್ಲಿ ಯಾರ ಹೆಸರು ನಮೂದು ಅಗಿದೆ; ಎಷ್ಟು ಜಾಗ ಒತ್ತುವರಿಯಾಗಿದೆ; ಜಾಗ ಒತ್ತುವರಿಗೆ ಸಹಕರಿಸಿದ ಅಧಿಕಾರಿಗಳ ಮೇಲೆ ಕ್ರಿಮಿನಲ್ ಮೊಕದ್ದಮೆ ದಾಖಲಿಸದಿರಲು ಕಾರಣವೇನು (ವಿವರ ನೀಡುವುದು) | ಬೆಂಗಳೂರು ನಗರ ನೀಲಸಂದ್ರ ಗ್ರಾಮದಲ್ಲಿರುವ ಸರ್ವೆ ನಂ 79 ರಲ್ಲಿನ ಒಟ್ಟು 15-12 ಎಕರೆ/ಗುಂಟೆ ಜಮೀನು ತಿಗಳರಪೇಟೆ ಶ್ರೀ ಧರ್ಮರಾಯಸ್ವಾಮಿ ದೇವಾಲಯಕ್ಕೆ ಸೇರಿದ ಇನಾಂ ಜಮೀನಾಗಿದ್ದು ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ 12850/1989 ಮತ್ತು 12850ಎ ರಿಂದ 12850 ಜಿ/ 1989ರಲ್ಲಿ ದಿನಾಂಕ:12-101990ರಂದು ನೀಡಿರುವ ತೀರ್ಪಿನ ವಿರುದ್ಧ ಶ್ರೀ ಮುನಿಉಪ್ಪ ಹಾಗೂ ಇತರರು ಮಾನ್ಯ ಸರ್ವೋಚ್ಛ ನ್ಯಾಯಾಲಯದಲ್ಲಿ ಎಲ್ . ಎಲ್ . ಪಿ ಸಂಖ್ಯೆ 5634-35/1991 ಮತ್ತು 5398-99/1993 ಅನ್ನು ದಾಖಲುಮಾಡಿದ್ದು ಸದರಿ ಪ್ರಕರಣಗಳನ್ನು ಮಾನ್ಯ ಸರ್ವೋಚ್ಛ ನ್ಯಾಯಾಲಯವು ಕ್ರಮವಾಗಿ ದಿನಾಂಕ:08-04-1991 ರಂದು ಹಾಗೂ ದಿನಾಂಕ:16-02-1994 ರಂದು ಗುಣಾಂಶಗಳ ಆಧಾರದಲ್ಲಿ ವಜಾಗೊಳಿಸಿರುತ್ತದೆ. ಇದರಿಂದಾಗಿ ಪ್ರಸ್ತಾಪಿತ ಜಮೀನುಗಳು ಹಕ್ಕು ಶ್ರೀ ಧರ್ಮರಾಯಸ್ವಾಮಿ ದೇವಾಲಯಕ್ಕೆ ಸ್ಥಿರೀಕರಣಗೊಂಡು ಅಂತಿಮವಾಗಿರುತ್ತದೆ.<br>ದಿನಾಂಕ:06/01/1993ರ ಹಕ್ಕು ಬದಲಾವಣೆ ವಹಿಯಲ್ಲಿ ಖಾತೆ ಮತ್ತು ಪಹಣಿ ಕಲಂಗಳಲ್ಲಿ ಶ್ರೀ ಧರ್ಮರಾಯಸ್ವಾಮಿ ದೇವಸ್ಥಾನ ಎಂದು ಹೆಸರು ಬದಲಾಯಿಸಲು ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು(ಅಪರ) ರವರು ಮ್ಯೂಟೇಷನ್‌ನಲ್ಲಿ ಅಂಗೀಕರಿಸಿರುತ್ತಾರೆ. |

ನೀಲಸಂದ್ರ ಗ್ರಾಮದಲ್ಲಿರುವ ಸರ್ವೆ ನಂ 79 ರಲ್ಲಿನ 6-12 ಎಕರೆ/ಗುಂಟೆ ಜಾಗದಲ್ಲಿ ಅನಧಿಕೃತವಾಗಿ 223 ಮನೆಗಳು ನಿರ್ಮಾಣಗೊಂಡಿದ್ದು, ಉಳಿದಂತೆ 9-00 ಎಕರೆ ಜಾಗವು ಖಾಲಿ ಪ್ರದೇಶವಾಗಿದ್ದು, ಕಾಂಪೌಂಡ್ ಗೋಡೆ ನಿರ್ಮಾಣ ಮಾಡಲು ಅಗತ್ಯ ಕ್ರಮಕೈಗೊಳ್ಳಲಾಗುತ್ತಿದೆ.

ಮುಂದುವರೆದು ಪ್ರಸ್ತಾಪಿತ ಜಮೀನಲ್ಲಿರುವ ಅನಧಿಕೃತದಾರರನ್ನು ತೆರವುಗೊಳಿಸುವ ಕುರಿತು ಮಾನ್ಯ ಕರ್ನಾಟಕ ಭೂ ಕಬಳಿಕೆ ನಿಷೇದ ವಿಶೇಷ ನ್ಯಾಯಾಲಯದಲ್ಲಿ 5 ಜನ ಅನಧಿಕೃತದಾರರ ವಿರುದ್ಧ ದೇವಾಲಯದ ಪರವಾಗಿ ಪ್ರಕರಣಗಳನ್ನು ದಿನಾಂಕ:26-07-2021ರಂದು ದಾಖಲು ಮಾಡಿದ್ದು ಸದರಿ ಪ್ರಕರಣಗಳ ವಿಚಾರಣೆಯು ದಿನಾಂಕ:12-01-2022 ಕ್ಕೆ ನಿಗಧಿಯಾಗಿದ್ದು ಈಗಾಗಲೇ ಮಾನ್ಯ ನ್ಯಾಯಾಲಯಕ್ಕೆ ದಾಖಲೆಗಳನ್ನು ಸಲ್ಲಿಸಿದ್ದು ದೇವಾಲಯದ ಪರವಾಗಿ ನ್ಯಾಯಾಲಯದ ಆದೇಶವಾದ ನಂತರ ಅನಧಿಕೃತ ಒತ್ತುವರಿದಾರರನ್ನು ತೆರವುಗೊಳಿಸಲು ಕ್ರಮ ಕೈಗೊಳ್ಳಲಾಗುವುದು. ಉಳಿದ ಒತ್ತುವರಿದಾರರ ವಿರುದ್ಧವು ಸಹ ಭೂ ಕಬಳಿಕೆ ನಿಷೇದ ವಿಶೇಷ ನ್ಯಾಯಾಲಯದಲ್ಲಿ ಪ್ರಕರಣ ದಾಖಲಿಸಲು ದೇವಾಲಯದ ಕಾರ್ಯ ನಿರ್ವಾಹಕ ಅಧಿಕಾರಿಯವರಿಗೆ ಸೂಚಿಸಲಾಗಿರುತ್ತದೆ

ದೇವಾಲಯಕ್ಕೆ ಸೇರಿದ ನೀಲಸಂದ್ರ ಗ್ರಾಮದಲ್ಲಿರುವ ಸರ್ವೆ ನಂ 79 ರಲ್ಲಿನ 15-12 ಎ/ಗು ಜಮೀನಿನಲ್ಲಿರುವ ಅನಧೀಕೃತದಾರರನ್ನು ತೆರವುಗೊಳಿಸಲು ಕ್ರಮ ವಹಿಸುವಂತೆ ಮಾನ್ಯ ಸರ್ಕಾರಿ ಜಮೀನುಗಳು ಸಂರಕ್ಷಣಾ ಸಮಿತಿ ಈ ಹಿಂದಿನ ಹಲವಾರು ಸಭೆಗಳಲ್ಲಿ ಈ ಬಗ್ಗೆ ಮಾನ್ಯ ಸಮಿತಿಯ ಅಧ್ಯಕ್ಷರು ನೀಡಿರುವ ನಿರ್ದೇಶನಗಳ ಹಿನ್ನಲೆಯಲ್ಲಿ ಆಸ್ತಿ ಸಂರಕ್ಷಿಸುವ ಹಿತ ದೃಷ್ಟಿಯಿಂದ ಪ್ರಸ್ತಾಪಿತ ಜಮೀನಿನಲ್ಲಿರುವ ಅನಧಿಕೃತ ಒತ್ತುವರಿದಾರರ ವಿರುದ್ಧ ಪಿಪಿಎ ಪ್ರಕರಣ ದಾಖಲಿಸಲು ನಿಯಾಮಾನುಸಾರ ಕ್ರಮ ಕೈಗೊಳ್ಳುವಂತೆ ಸಹಾಯಕ ಆಯುಕ್ತರು ಮುಜರಾಯಿ ಕಾಮಗಾರಿಗಳು ನಗರ ಸಭಾ ವಲಯ ಬೆಂಗಳೂರು ಮತ್ತು ಸಂಬಂಧ ಪಟ್ಟ ದೇವಾಲಯದ ಕಾರ್ಯ ನಿರ್ವಾಹಕ ಅಧಿಕಾರಿಯವರಿಗೆ ತಿಳಿಸಲಾಗಿರುತ್ತದೆ.

ಸದರಿ ಜಾಗದ ಒತ್ತುವರಿಗೆ ಸಂಬಂಧಿಸಿದಂತೆ ಪೂರಕ ದಾಖಲಾತಿಗಳು/ ಮಾಹಿತಿಗಳನ್ನು ಕಲೆಹಾಕಲಾಗುತ್ತಿದ್ದು, ಮಾನ್ಯ **"ಸರ್ಕಾರಿ ಜಮೀನುಗಳ ಸಂರಕ್ಷಣಾ ಸಮಿತಿ"** ಸಭೆಗೆ ದಾಖಲೆ/ಮಾಹಿತಿಯನ್ನು ಒದಗಿಸಿದ ನಂತರ ಮಾನ್ಯ ಸಮಿತಿಯ ನಿರ್ದೇಶನಾನುಸಾರ ಒತ್ತುವರಿಗೆ ಸಹಕರಿಸಿದ ತಪ್ಪಿತಸ್ಥರ ವಿರುದ್ಧ ನಿಯಮಾನುಸಾರ ಕ್ರಮಗಳನ್ನು ತೆಗೆದುಕೊಳ್ಳಲಾಗುತ್ತದೆ.

**ಸಂಖ್ಯೆ: ಕಂಇ 284 ಮುಸಪ್ರ 2021**

**(ಶಶಿಕಲಾ. ಅ. ಜೊಲ್ಲೆ)**

**ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು**